ಓದಿ ಹೇಳಿ ಸರಣಿ

# ಮಿಷ್ಟು ಮಾಡಿದ ಆಯ್ಕೆ

ವಿದ್ಯಾ ಮತ್ತು ರಾಜಾರಾಮ್ ಶರ್ಮ

ಒಂದು ದಿನ,
ಬಹಳ ಬೇಗ ಎದ್ದಳು ಮಿಷ್ಟು,
ಇಷ್ಟು ಬೇಗ,
ಯಾವತ್ತೂ ಎದ್ದೇ ಇರಲಿಲ್ಲ ಮಿಷ್ಟು.
ಹೊರಗೆ ನೋಡಿದಳು.
ಕಿಟಕಿಯ ಹೊರಗೆ ನೋಡಿದಳು.
ಆಹಾ! ಎಂದಳು ಆಕಾಶವನ್ನು ನೋಡುತ್ತಾ,
ಹರ್ಷದಿಂದ.





ಸಾಕಷ್ಟು ಕಾಲ,
ಆಕಾಶವನ್ನು ನೋಡುತ್ತಲೇ ಇದ್ದಳು.
ಥಟ್ಟನೆ ಏನೋ ಹೊಳೆಯಿತು.
ಹೊಳೆದದ್ದು ಬಹಳ ಒಳ್ಳೆಯ ವಿಚಾರ ಎನಿಸಿತು.
ಹೊರಗೆ ಓಡಿದಳು ತೋಟದ ಕಡೆಗೆ.
ಅತ್ತ ಇತ್ತ ನೋಡಿದಳು,
ಜರ್ಬೆರಾ ಹೂಗಳನ್ನು ನೋಡಿದಳು,
ಆದರೆ ಅವುಗಳ ಮೇಲೆ ಗಮನ ಉಳಿಯಲಿಲ್ಲ.

ಅಲ್ಲಿದ್ದ ಬೇರೆ ಹೂಗಳನ್ನು ನೋಡಿದಳು.
ಗಮನವಿಟ್ಟು ನೋಡಿದಳು.
ಇಲ್ಲ, ಇದಲ್ಲವೇ ಅಲ್ಲ, ಎಂದಳು
ನಿರಾಶಳಾಗಿ.



ಸ್ಟ್ರಾಬೆರಿಗಳನ್ನು ಕಂಡಾಗ,
ಪುನಃ ಗಮನವಿಟ್ಟು ನೋಡಿದಳು,
ಮತ್ತೆ ಮತ್ತೆ ನೋಡಿದಳು,
ಇಲ್ಲ, ಇದಲ್ಲವೇ ಅಲ್ಲ, ಎಂದಳು
ನಿರಾಶಳಾಗಿ.





ಅಂಗಳದಲ್ಲಿದ್ದ ರಂಗೋಲೆ ನೋಡಿದಾಗ,
ಚಿಟ್ಟೆಗಳನ್ನು ಗಮನಿಸಲಿಲ್ಲ.
ಮೀನುಗಳನ್ನೂ ಗಮನಿಸಲಿಲ್ಲ.
ಗಮನಿಸಿದ್ದು ಹೂಗಳನ್ನು,
ಹೂಗಳಿದ್ದ ಕುಂಡಗಳನ್ನು.
ಇಲ್ಲ, ಇದಲ್ಲವೇ ಅಲ್ಲ, ಎಂದಳು
ನಿರಾಶಳಾಗಿ.

ಕತ್ತೆತ್ತಿ ಮೇಲೆ ನೋಡಿದಾಗ,
ಮರದ ಕೊಂಬೆಗಳಲ್ಲಿ
ಹೊಳೆಯುತ್ತಿದ್ದ ಗುಲಗಂಜಿಗಳನ್ನು ನೋಡಿ
ಮುಖ ಅರಳಿತು.
ಆದರೂ, ತಲೆ ಅಲ್ಲಾಡಿಸುತ್ತಾ
ಇಲ್ಲ, ಇದಲ್ಲವೇ ಅಲ್ಲ, ಎಂದಳು
ನಿರಾಶಳಾಗಿ.





ಕಾಸ್ಮಾಸ್ ಹೂವಿನ ಮೇಲೆ ಚಿಟ್ಟೆಯನ್ನು ಕಂಡಾಗ,
ಗಮನವಿಟ್ಟು ನೋಡಿದಳು,
ಬಹಳ ಹೊತ್ತು ನೋಡಿದಳು.
ಪುನಃ ತಲೆ ಅಲ್ಲಾಡಿಸುತ್ತಾ
ಇಲ್ಲ, ಇದಲ್ಲವೇ ಅಲ್ಲ, ಎಂದಳು
ನಿರಾಶಳಾಗಿ.

ಪುಟ್ಟ ಮಿಷ್ಟುವಿಗೆ ಬೇಜಾರಾಯಿತು.
ಮನೆ ಒಳಗೆ ಹೋದಳು. ಬೊಂಬೆಗಳ ಮೇಲೆ ಕಣ್ಣು
ಬಿದ್ದಾಗ, ಓಡಿದಳು ಅವುಗಳ ಹತ್ತಿರ ಉತ್ಸಾಹದಿಂದ.
ಪ್ರತಿ ಒಂದನ್ನೂ ನೋಡಿದಳು, ಗಮನವಿಟ್ಟು ನೋಡಿದಳು.
ಆದರೆ, ಬೇಸರದಿಂದ, ಮತ್ತೆ ತಲೆ ಅಲ್ಲಾಡಿಸುತ್ತಾ
ಇಲ್ಲ, ಇದಲ್ಲವೇ ಅಲ್ಲ, ಎಂದಳು.



ಆಗ, ಕಣ್ಣಿಗೆ ಬಿದ್ದದ್ದು ಒಂದು ಬಟ್ಟಲು.
ಬಟ್ಟಲಲ್ಲಿದ್ದ ಪಾರಿಜಾತ ಹೂಗಳು.
ಅಪ್ಪಟ ಬಿಳಿ ಪಾರಿಜಾತ,
ಕೇಸರಿ ಕಾವಿನ ಪಾರಿಜಾತ.
ನೋಡಿ ಖುಷಿಯಿಂದ ಕೂಗಿದಳು,
ಇದೇ, ಇದೇ! ಇದೇನೇ.



ಆ ತಕ್ಷಣ, ತನಗೆ ಬೇಕೇಬೇಕು ಎಂದಳು,
ಒಂದು ದಿಂಬು,
ಕೇಸರಿ ಬಣ್ಣದ ದಿಂಬು.
ಪಾರಿಜಾತ ಕಾವಿನ ಕೇಸರಿ ಬಣ್ಣದ್ದೇ ದಿಂಬು.
ಏಕೆಂದರೆ,
ಮುಂಜಾನೆ ಎದ್ದಾಗ,
ಆಕಾಶದಲ್ಲಿ ಕಂಡ ಬಣ್ಣ,
ಕಂಡು ಬಹಳ ಇಷ್ಟಪಟ್ಟ ಬಣ್ಣ,
ಪಾರಿಜಾತ ಕಾವಿನಂತೇ ಇದ್ದ ಅದೇ ಕೇಸರಿ ಬಣ್ಣ!





## ಇತರ ಶೀರ್ಷಿಕೆಗಳು

ಮಿಷ್ಟು
ಮಿಷ್ಟು ಕಂಡ ಚಮತ್ಕಾರ
ಮಿಷ್ಟುವಿನ ಮುಗಿಯದ ಪ್ರಶ್ನೆಗಳು

Vidya Online
A PARTNERSHIP FOR TEACHERS, CHILDREN AND EDUCATION
Visit http://vidyaonline.net for more titles